# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 192
ಸದಸ್ಯರ ಹೆಸರು : ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ)
ಉತ್ತರಿಸುವವರು : ಮುಖ್ಯಮಂತ್ರಿ
ಉತ್ತರಿಸಬೇಕಾದ ದಿನಾಂಕ : 18.07.2019

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 1957 ರಿಂದ 2001ರವರೆಗೆ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯಿಂದ ವಿವಿಧ ಯೋಜನೆಗಳಡಿಯಲ್ಲಿ ನೀಡಿರುವ ಸಾಲ ಎಷ್ಟು; (ವಿವರ ನೀಡುವುದು) | ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ ಬೆಂಗಳೂರು ಸಂಸ್ಥೆಯು ಖಾದಿ ಮತ್ತು ಗ್ರಾಮೋದ್ಯೋಗ ಆಯೋಗ, ಮುಂಬೈ ಸಂಸ್ಥೆಯಿಂದ ಸಾಲವನ್ನು ಪಡೆದು ಫಲಾನುಭವಿ/ಸಂಘ-ಸಂಸ್ಥೆಗಳಿಗೆ ನೀಡಲಾಗಿದೆ.<br><br>ಈ ಯೋಜನೆಗಳಡಿ 1957-2001ರವರೆಗೆ ನೀಡಿರುವ ಸಾಲದ ಮೊತ್ತ ಕೆಳಕಾಣಿಸಿದಂತೆ ಇರುತ್ತದೆ.<br><br>1. ಧನಸಹಾಯ ಸ್ವರೂಪ ಯೋಜನೆಯಡಿ 1957 ರಿಂದ 1995ರವರೆಗೆ ಧನಸಹಾಯ ಮಾಡಲಾಗಿದೆ. ಈ ಯೋಜನೆಯು 1995ರ ನಂತರ ಸ್ಥಗಿತಗೊಂಡಿರುತ್ತದೆ. ಈ ಯೋಜನೆಯಡಿಯಲ್ಲಿ ಒಟ್ಟು 21106 ಕಸುಬುದಾರರಿಗೆ ನೀಡಿರುವ ಧನಸಹಾಯದ ಒಟ್ಟು ಮೊತ್ತ ರೂ.10679.00 ಲಕ್ಷಗಳಾಗಿರುತ್ತದೆ.<br><br>2. ಸಮೂಹ ಬ್ಯಾಂಕ್ ಯೋಜನೆಯಡಿ 1996 ರಿಂದ 2001ನೇ ಸಾಲಿನವರೆಗೆ ಕೆಳಕಾಣಿಸಿದಂತೆ ಧನಸಹಾಯ ಮಾಡಲಾಗಿದೆ. ಈ ಯೋಜನೆಯು 2001ರ ನಂತರ ಸ್ಥಗಿತಗೊಂಡಿರುತ್ತದೆ. ಈ ಯೋಜನೆಯಡಿಯಲ್ಲಿ ಒಟ್ಟು 2457 ಕಸುಬುದಾರರಿಗೆ ರೂ. 8723.13 ಲಕ್ಷಗಳ ಧನಸಹಾಯ ನೀಡಲಾಗಿರುತ್ತದೆ. ವರ್ಷವಾರು ವಿವರ ಕೆಳಕಾಣಿಸಿದಂತೆ ಇರುತ್ತದೆ.<br><br>ವರ್ಷ — ಧನಸಹಾಯ (ರೂ.ಲಕ್ಷಗಳಲ್ಲಿ)<br>1996 — 746.09<br>1997 — 1528.95<br>1998 — 1525.27<br>1999 — 2092.27<br>2000 — 2065.46<br>2001 — 765.09<br>**ಒಟ್ಟು** — **8723.13** |
| ಆ) | ಈ ಎಲ್ಲಾ ಯೋಜನೆಯಲ್ಲಿನ ಸಾಲದ ಮೇಲೆ ಬೆಳೆದಿರುವ ಬಡ್ಡಿ ಮೊತ್ತ ಎಷ್ಟು; | 1. ಧನಸಹಾಯ ಸ್ವರೂಪ ಯೋಜನೆಯಡಿ ಖಾದಿ ಆಯೋಗಕ್ಕೆ ಪಾವತಿಸಬೇಕಾದ ಬಾಕಿ ಬಡ್ಡಿ ಮೊತ್ತ ದಿನಾಂಕಃ 31-03-2019ಕ್ಕೆ ಇದ್ದಂತೆ ರೂ. 34.60 ಕೋಟಿಗಳು<br>2. ಸಮೂಹ ಬ್ಯಾಂಕ್ ಯೋಜನೆಯಡಿ ಖಾದಿ ಆಯೋಗಕ್ಕೆ ಪಾವತಿಸಬೇಕಾದ ಬಾಕಿ ಬಡ್ಡಿ ರೂ. 90.83 ಕೋಟಿಗಳು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಇ) | ಈ ಸಾಲವನ್ನು ಮನ್ನಾ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದೆ ಇದೆಯೇ; | ರಾಜ್ಯ ಸರ್ಕಾರವು 2018-19ನೇ ಸಾಲಿನ ಆಯವ್ಯಯದಲ್ಲಿ ಮಂಡಳಿಯ ವತಿಯಿಂದ ಸಾಲ ಪಡೆದಿರುವ ಬಿ.ಪಿ.ಎಲ್. ಕಾರ್ಡ್ ಹೊಂದಿರುವ ಕಸುಬುದಾರರ ಸಾಲ ಮನ್ನಾ ಮಾಡುವ ಬಗ್ಗೆ ಪ್ರಸ್ತಾಪಿಸಲಾಗಿದೆ. |
| ಈ) | ಇದ್ದಲ್ಲಿ, ಯಾವಾಗ ಮನ್ನಾ ಮಾಡಲಾಗುವುದು? (ವಿವರ ನೀಡುವುದು) | ಮಂಡಳಿಯ ವತಿಯಿಂದ ದಿ:31-03-2019ಕ್ಕೆ ಧನಸಹಾಯ ಸ್ವರೂಪ ಸಾಲ ಯೋಜನೆಯ (ಪಿ.ಬಿ.ಎಸ್) ಮತ್ತು ಸಮೂಹ ಬ್ಯಾಂಕ್ ಯೋಜನೆಯಡಿ (ಸಿ.ಬಿ.ಸಿ.) ಬಿ.ಪಿ.ಎಲ್. ಕಾರ್ಡ್ ಹೊಂದಿರುವ ಕಸುಬುದಾರರ ಸಮಗ್ರ ಪರಿಶೀಲನೆ ಕಾರ್ಯವನ್ನು ಕೈಗೊಂಡು ಸಾಲ, ಸಾಮಾನ್ಯಬಡ್ಡಿ, ದಂಡಬಡ್ಡಿ, ಹೆಚ್ಚುವರಿ ಬಡ್ಡಿ ವಿವರಗಳನ್ನು ಒಳಗೊಂಡ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿರುತ್ತದೆ.<br><br>ಅದರಂತೆ ಸರ್ಕಾರವು 2019-20ನೇ ಸಾಲಿನ ಆಯವ್ಯಯದಲ್ಲಿ ರೂ. 4000.00 ಲಕ್ಷಗಳನ್ನು ಈ ಯೋಜನೆಗೆ ಒದಗಿಸಿದ್ದು, ಸಾಲ ಮನ್ನಾ ಪ್ರಸ್ತಾವನೆಯನ್ನು ಅನುಷ್ಠಾನಗೊಳಿಸುವ ಪ್ರಕ್ರಿಯೆ ಕುರಿತು ಪರಿಶೀಲನಾ ಹಂತದಲ್ಲಿರುತ್ತದೆ. |

**ಸಿಐ 71 ಸಿಎಸ್‌ಸಿ 2019**

ಹೆಚ್.ಡಿ. ಕುಮಾರಸ್ವಾಮಿ
ಮುಖ್ಯಮಂತ್ರಿ